## English Translation.

May you, Cows, have many calves grazing upon food pasture, and drinking pure water at accessible ponds may no thief be your master : no beast of prey (assail you), and may the (fatal) weapon of Rudra avoid you.



॥ ಸಂಹಿತಾಪಾಠಃ ॥

ಉಪೇದಮುಪಪರ್ಚನಮಾಸು ಗೋಷೂಪ ಪೃಚ್ಯತಾಂ ।
ಉಪ ಋಷಭಸ್ಯ ರೇತಸ್ಯುಪೇಂದ್ರ ತವ ವೀರ್ಯೇ ॥ ೮ ॥

॥ ಪದಪಾಠಃ ॥

ಉಪ । ಇದಂ । ಉಪऽಪರ್ಚನಂ । ಆಸು । ಗೋಷು । ಉಪ । ಪೃಚ್ಯತಾಂ ।
ಉಪ । ಋಷಭಸ್ಯ । ರೇತಸಿ । ಉಪ । ಇಂದ್ರ । ತವ । ವೀರ್ಯೇ ॥ ೮ ॥

॥ ಸಾಯಣಭಾಷ್ಯಂ ॥

ಆಸು ಗೋಷ್ವಿದಮುಪಪರ್ಚನಮಾಪ್ಯಾಯನಮುಪ ಪೃಚ್ಯತಾಂ । ಸಂಪೃಚ್ಯತಾಂ । ಹೇ ಇಂದ್ರ ತವ ವೀರ್ಯೇ ತ್ವದೀಯವೀರ್ಯೇ ನಿಮಿತ್ತೇ ಋಷಭಸ್ಯ ಗವಾಂ ಗರ್ಭಮಾದಧಾನಸ್ಯ ವೃಷಭಸ್ಯ ರೇತಸೀದಮುಪಪರ್ಚನಮಾಪ್ಯಾಯನಂ । ಗೋಷು ಹ್ಯಾಪ್ಯಾಯಿತಾಸು ಸತೀಷು ತತ್ಸಂಬಂಧಿಕ್ಷೀರಾದಿಹವಿರ್ದ್ವಾರೇಣೇಂದ್ರ ಆಪ್ಯಾಯಿತೋ ಭವತೀತ್ಯರ್ಥಃ । ಉಪೇತಿ ಪುನರ್ವಚನಂ ಪಾದಭೇದಾನಾಂ ಪೂರಣಾರ್ಥಮಿತಿ ॥

॥ ಪ್ರತಿಪದಾರ್ಥ ॥

**ಆಸು ಗೋಷು**—ಈ ಗೋವುಗಳಲ್ಲಿ । **ಇದಂ ಉಪಪರ್ಚನಂ**—ಈ ವಿಧವಾದ ಪುಷ್ಟಿಯು । **ಉಪ ಪೃಚ್ಯತಾಂ**—ಪ್ರಾರ್ಥಿತವಾಗಲಿ । **ಇಂದ್ರ**—ಎಲೈ ಇಂದ್ರನೇ । **ತವ**—ನಿನ್ನ । **ವೀರ್ಯೇ**—ವೀರ್ಯ ಪ್ರಕಟನೆಗಾಗಿ । **ಋಷಭಸ್ಯ**—ವೃಷಭದ । **ರೇತಸಿ**—ರೇತಸ್ಸಿನಲ್ಲಿ ವೀರ್ಯವಿರಲಿ.

॥ ಭಾವಾರ್ಥ ॥

ಈ ಗೋವುಗಳಲ್ಲಿ ಮೇಲೆ ಹೇಳಿರುವ ಪುಷ್ಟಿಯಿರಲೆಂದು ಪ್ರಾರ್ಥಿತವಾಗಲಿ. ಎಲೈ ಇಂದ್ರನೇ, ನಿನ್ನ ವೀರ್ಯಾಭಿವೃದ್ಧಿಗಾಗಿ ವೃಷಭದ ರೇತಸ್ಸಿನಲ್ಲಿ ವೀರ್ಯವಿರಲಿ.

## English Translation.

Let the nourishment of Cows be solicited, let the vigour of the bull (be requsted), Indra, for your invigoration.

|| ವಿಶೇಷವಿಷಯಗಳು ||

ಪಶುಗಳಲ್ಲಿ ಎಂದರೆ ಗೋವುಗಳಲ್ಲಿ ಪುಷ್ಟಿಯಿರುವುದರಿಂದ ಅವುಗಳು ಹಾಲನ್ನು ಸಮೃದ್ಧಿಯಾಗಿ ಕರೆಯುವವು. ಹಾಲಿನಿಂದ ದಧಿಘೃತಾದಿಗಳು ಉಂಟಾಗಿ ಯಜ್ಞಾದಿಗಳಲ್ಲಿ ಉಪಯೋಗಿಸುವ ಘೃತ (ಆಜ್ಯವು) ದೊರೆಯುವುದು. ಆಜ್ಯಾದಿಗಳಿಂದ ಇಂದ್ರಾದಿ ದೇವತೆಗಳನ್ನುದ್ದೇಶಿಸಿ ಹೋಮಮಾಡುವುದರಿಂದ ಆ ದೇವತೆಗಳಿಗೆ ತೃಪ್ತಿಯಾಗುವುದು. ಈ ಕಾರಣದಿಂದ ಗೋವುಗಳಲ್ಲಿ ಪುಷ್ಟಿಯಿರಲೆಂದು ಪ್ರಾರ್ಥಿತವಾಗಿದೆ. ಮತ್ತು ಗೋವುಗಳು ಕರುಗಳನ್ನು ಹಾಕಿದಾಗ ಮಾತ್ರ ಕೆಲವುಕಾಲ ಹಾಲನ್ನು ಕರೆಯುವುದರಿಂದ ಕರುಗಳನ್ನು ಹಾಕುವುದಕ್ಕಾಗಿ ವೃಷಭದಲ್ಲಿ ವೀರ್ಯವಿರಲಿ ಎಂಬ ವಿಷಯವೂ ಇಲ್ಲಿ ಉಕ್ತವಾಗಿದೆ. ಗೋಸಂತತಿಯ ಅಭಿವೃದ್ಧಿಗಾಗಿ ವೃಷಭದ ರೇತಸ್ಸಿನಲ್ಲಿ ವೀರ್ಯವು ಇರುವುದು ಅವಶ್ಯಕವು. ಅದರಂತೆ ಯಜ್ಞಕ್ಕೆ ಕ್ಷೀರಾದಿಗಳು ಸಮೃದ್ಧಿಯಾಗಿ ದೊರೆಯಬೇಕಾದರೆ ಗೋವುಗಳು ಕರುವನ್ನು ಹಾಕಿ ಪುಷ್ಟಿಯಾಗಿರಬೇಕಾದುದೂ ಅವಶ್ಯಕವು. ಆದುದರಿಂದ ಈ ಎರಡು ಕಾರ್ಯಗಳೂ ಅತ್ಯವಶ್ಯಕವೆಂದೂ ಇವು ಇಂದ್ರನ ಶಕ್ತಿಸಾಮರ್ಥ್ಯದಿಂದಲೇ ಉಂಟಾಗುವುದೆಂದೂ ಈ ಋಕ್ಕಿನಲ್ಲಿ ಸ್ಪಷ್ಟವಾಗಿ ವಿವರಿಸಿದೆ.

---

ವೇದಾರ್ಥಸ್ಯ ಪ್ರಕಾಶೇನ ತಮೋ ಹಾರ್ದಂ ನಿವಾರಯನ್ ।
ಪುಮರ್ಥಾಂಶ್ಚತುರೋ ದೇಯಾದ್ವಿದ್ಯಾತೀರ್ಥಮಹೇಶ್ವರಃ ॥

ಇತಿ ಶ್ರೀಮದ್ರಾಜಾಧಿರಾಜ ಪರಮೇಶ್ವರ ವೈದಿಕಮಾರ್ಗಪ್ರವರ್ತಕ ಶ್ರೀ ವೀರಬುಕ್ಕಭೂಪಾಲಸಾಮ್ರಾಜ್ಯ-
ಧುರಂಧರೇಣ ಸಾಯಣಾಚಾರ್ಯೇಣ ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಋಕ್ಸಂಹಿತಾಭಾಷ್ಯೇ ಚತುರ್ಥಾಷ್ಟಕೇ ಷಷ್ಠೋಽಧ್ಯಾಯಃ ಸಮಾಪ್ತಃ

॥ ಓಂ ತತ್ಸತ್ ॥

ಇಲ್ಲಿಗೆ ಶ್ರೀಸಾಯಣಭಾಷ್ಯಸಹಿತವೂ ಕರ್ನಾಟಕ ಭಾಷಾನುವಾದಯುತವೂ ಆದ
ಋಗ್ವೇದಸಂಹಿತೆಯ ನಾಲ್ಕನೆಯ ಅಷ್ಟಕದಲ್ಲಿ
ಆರನೆಯ ಅಧ್ಯಾಯವು ಮುಗಿದುದು.

---

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ವಾಗೀಶ್ವರ ನಮೋಽಸ್ತು ತೇ ॥

॥ ಶುಭಂ ಭೂಯಾತ್ ॥

॥ ಮಂಗಳಂ ॥